KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಸೋಮವಾರ, ಆಗಸ್ಟ್ ೧೭, ೨೦೦೯ (ಶ್ರಾವಣ ೨೬, ಶಕ ವರ್ಷ ೧೯೩೧) | ನಂ. ೨೧೦ |
|---|---|---|

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಕಾಇ 262 ಎಲ್‌ಇಟಿ 2009, ಬೆಂಗಳೂರು, ದಿನಾಂಕ: 17ನೇ ಆಗಸ್ಟ್, 2009**

ಮೆ॥ ಫುಡ್ ಎಕ್ಸ್‌ಪ್ರೆಸ್ ಸ್ಟೋರ್ಸ್ ಸಂಸ್ಥೆಯು ತನ್ನ ಬ್ರಾಂಡ್ ಹೆಸರಿನ 'TOTAL' ಅಡಿಯಲ್ಲಿ ಸೂಪರ್ ಮಾರ್ಕೆಟ್ ಮತ್ತು ಹೈಪರ್ ಮಾರ್ಕೆಟ್‌ಗಳನ್ನು ಬೆಂಗಳೂರಿನ ಪ್ರಮುಖ ಬಡಾವಣೆಗಳಲ್ಲಿ ಮಾಲ್‌ಗಳನ್ನು ತೆರೆದಿದ್ದು, ಆ ಮೂಲಕ ಗ್ರಾಹಕರಿಗೆ ಅತ್ಯುತ್ತಮ ಆಹಾರ ಸಾಮಾಗ್ರಿ ಮತ್ತು ಉತ್ತಮ ಗುಣಮಟ್ಟದ ಗೃಹ ಉಪಯೋಗಿ ವಸ್ತುಗಳನ್ನು ಮಾರಾಟ ಮಾಡುತ್ತಿದ್ದು, ಬೆಂಗಳೂರಿನಲ್ಲಿನ ಐಟಿ/ಬಿಪಿಓ ಮತ್ತು ಇತರೆ ವರ್ಗದ ಗ್ರಾಹಕರ ಅನುಕೂಲಕ್ಕೆಂದು ತಮ್ಮ ಅಂಗಡಿಗಳನ್ನು ರಾತ್ರಿ 12–00 ಗಂಟೆಯವರೆಗೆ ತೆರೆಯಲು ಕೋರಿಕೆಯನ್ನು ಸಲ್ಲಿಸಿರುತ್ತಾರೆ ಅಲ್ಲದೇ, ಕೆಳಕಂಡ ನಿಬಂಧನೆಗಳನ್ನು ಪಾಲಿಸುವುದಾಗಿಯೂ ಸಹ ತಿಳಿಸಿರುತ್ತಾರೆ.

1. No female employee will be deployed after 8.00 p.m. and no employee will be forced to work for more than 8 hrs.
2. The additional security personnel will be deployed during the extended hours.
3. Employees deployed during the extended hours will be dropped back to their doorstep by the company transport.
4. Employees working during the extended hours will be provided dinner and snacks at company's cost.
5. Employees deployed during the extended hours will be considered for additional shift allowance.
6. We will make a request to the nearest police station to provide police personnel during the extended hours to keep law and order in control.
7. Proper lighting and drinking water will be provided to the customers till the closure of the store.
8. We ensure that the liquor section of the store will be closed as per the guidelines of the excise department.
9. Sufficient parking slots will be provided to the customers with the guards.
10. Employees safety and health will be ensured by the company.

ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳ ಕಾಯ್ದೆ, 1961 ರ ಕಲಂ 11(3) ಅಡಿಯಲ್ಲಿ ಸಂಸ್ಥೆಗಳನ್ನು ತೆರೆಯುವ ಮತ್ತು ಮುಚ್ಚುವ ಬಗ್ಗೆ ರಾಜ್ಯ ಸರ್ಕಾರವು ವಿವಿಧ ಸಂಸ್ಥೆಗಳಿಗೆ ಬೇರೆ ಬೇರೆ ಸಮಯವನ್ನು ಅಥವಾ ಬೇರೆ ಬೇರೆ ವರ್ಗದ ಸಂಸ್ಥೆಗಳಿಗೆ ಅಥವಾ ಪ್ರದೇಶವಾರು ಅಥವಾ ವರ್ಷದಲ್ಲಿ ಬೇರೆ ಸಮಯವನ್ನು ನಿಗಧಿಗೊಳಿಸಬಹುದಾಗಿರುತ್ತದೆ.

ಆದ್ದರಿಂದ, ಕರ್ನಾಟಕ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳ ಕಾಯ್ದೆ, 1961 ರ ಪ್ರಕರಣ 11(3)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ (1962ರ ಕರ್ನಾಟಕ ಕಾಯ್ದೆ ಸಂಖ್ಯೆ.8) ಮೆ॥ ಜುಬಿಲಿಯಂಟ್ ಗ್ರೂಪ್ ಕಂಪನಿಯ ಮೆ॥ ಫುಡ್ ಎಕ್ಸ್‌ಪ್ರೆಸ್ ಸ್ಟೋರ್ಸ್ (ಎನ್‌ಪ್ರೋ ಆಯಿಲ್ ಪ್ರೈ. ಲಿ. ವಿಭಾಗ) ಇವರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಇರುವ ಈ ಕೆಳಕಂಡ ಹೈಪರ್ ಮಾರ್ಕೆಟ್‌ಗಳ (Malls) ಸಂಸ್ಥೆಗಳನ್ನು ಬೆಳಿಗ್ಗೆ 6–00 ಗಂಟೆಯಿಂದ ರಾತ್ರಿ 12–00 ಗಂಟೆಯವರೆಗೆ ತೆರೆಯಲು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮತಿ ನೀಡುವ ಬಗ್ಗೆ ಯಾರಾದರು ಮೇಲ್ಕಂಡ ಪ್ರಸ್ತಾವನೆ ಬಗ್ಗೆ ತಮ್ಮ ಆಕ್ಷೇಪಣೆಯನ್ನಾಗಲಿ ಅಥವಾ ಸಲಹೆಯನ್ನಾಗಲಿ ನೀಡಲು ಇಚ್ಛಿಪಟ್ಟಲ್ಲಿ, ಅಂತಹ ಸಲಹೆ ಸೂಚನೆಗಳನ್ನು ಲಿಖಿತವಾಗಿ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29, ಇವರಿಗೆ ಈ ಕರಡು ಪ್ರಸ್ತಾವನೆ ಪ್ರಕಟವಾದ 30 ದಿನಗೊಳಗಾಗಿ ಸಲ್ಲಿಸಲು ಸೂಚಿಸಲಾಗಿದೆ.

| | | |
|---|---|---|
| **ಹೈಪರ್ ಮಾರ್ಕೆಟ್ 1**<br>ಫುಡ್ ಎಕ್ಸ್‌ಪ್ರೆಸ್ ಸ್ಟೋರ್ಸ್ (ಎನ್‌ಪ್ರೋ ಆಯಿಲ್ ಪ್ರೈ. ಲಿ. ವಿಭಾಗ) ಗೋಪಾಲನ್ ಲೆಗಸಿ, ನಂ.148 (ಹಳೆ ನಂ.125/1), ಮೈಸೂರು ರೋಡ್, ಡಿವಿಜನ್ ನಂ.33, ಬೆಂಗಳೂರು–26. | **ಹೈಪರ್ ಮಾರ್ಕೆಟ್ 2**<br>ಫುಡ್ ಎಕ್ಸ್‌ಪ್ರೆಸ್ ಸ್ಟೋರ್ಸ್ (ಎನ್‌ಪ್ರೋ ಆಯಿಲ್ ಪ್ರೈ. ಲಿ. ವಿಭಾಗ)<br>ಕರ್ಮಷಿಯಲ್ ಕಾಂಪ್ಲೆಕ್ಸ್, ಹೊಸೂರ್ ರೋಡ್ ಜಂಕ್ಷನ್, ಮಡಿವಾಳ, ಬೆಂಗಳೂರು. | **ಹೈಪರ್ ಮಾರ್ಕೆಟ್ 3**<br>ಫುಡ್ ಎಕ್ಸ್‌ಪ್ರೆಸ್ ಸ್ಟೋರ್ಸ್ (ಎನ್‌ಪ್ರೋ ಆಯಿಲ್ ಪ್ರೈ. ಲಿ. ವಿಭಾಗ) ಸರ್ವೇ ನಂ.12/5, ಕೈಲೊಂಡರಹಳ್ಳಿ ವಿಲ್ಲೇಜ್, ವರ್ತೂರ್ ಹೋಬಳಿ, ಸರ್ಜಾಪುರ ಮುಖ್ಯ ರಸ್ತೆ, ಬೆಂಗಳೂರು ದಕ್ಷಿಣ ತಾಲ್ಲೂಕು. |
| **ಹೈಪರ್ ಮಾರ್ಕೆಟ್ 4**<br>ಫುಡ್ ಎಕ್ಸ್‌ಪ್ರೆಸ್ ಸ್ಟೋರ್ಸ್ (ಎನ್‌ಪ್ರೋ ಆಯಿಲ್ ಪ್ರೈ. ಲಿ. ವಿಭಾಗ) ನಂ.97, ಏರ್‌ಪೋರ್ಟ್ ರಸ್ತೆ, ಕೋನೇನ ಅಗ್ರಹಾರ ವಿಲ್ಲೇಜ್, ವರ್ತೂರ್ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು. | **ಸೂಪರ್ ಮಾರ್ಕೆಟ್ 1**<br>ನಂ.948, ಗಾಯತ್ರಿ ಚೇಂಬರ್ಸ್, ಜೆ.ಪಿ. ನಗರ, 2ನೇ ಹಂತ, 24ನೇ ಮೇನ್, ಮಾರನಹಳ್ಳಿ ಬಸ್ ನಿಲ್ದಾಣ, ಬೆಂಗಳೂರು–78. | **ಸೂಪರ್ ಮಾರ್ಕೆಟ್ 2**<br>ಎಸ್. ಜೆ. ಆರ್. ಪ್ರೈ, ಲಿ, ನಂ.1 ಕೈಗ್ರಾರಿಕಾ ಪ್ರದೇಶ, 7ನೇ ಬ್ಲಾಕ್, ಕೋರಮಂಗಲ, ಬೆಂಗಳೂರು–95. |

**ಷರತ್ತುಗಳು**

1. ಮಹಿಳಾ ಕಾರ್ಮಿಕರನ್ನು ರಾತ್ರಿ 8.00 ಗಂಟೆಯ ನಂತರ ಕೆಲಸಕ್ಕೆ ನಿಯೋಜಿಸಿಕೊಳ್ಳಬಾರದು.
2. ಕಾಮಿಕರ ಸುರಕ್ಷತೆ, ಭದ್ರತೆ ಹಾಗೂ ವಿವಿಧ ಕಾರ್ಮಿಕ ಕಾಯ್ದೆಯಡಿಯಲ್ಲಿ ಇರುವ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
3. ರಾತ್ರಿ 8.00 ಗಂಟೆಯ ನಂತರ ದುಡಿಯುವ ಕಾರ್ಮಿಕರಿಗೆ ಉಪಹಾರ, ಊಟ ಮತ್ತು ಕೆಲಸ ಮುಗಿದ ಬಳಿಕ ಅವರನ್ನು ಮನೆಯವರೆವಿಗೂ ಬಿಟ್ಟು ಬರುವ ಸಾರಿಗೆ ವ್ಯವಸ್ಥೆಯನ್ನು ಕಲ್ಪಿಸಿಕೊಡಬೇಕು.
4. ಕಾಯ್ದೆಯಡಿಯಲ್ಲಿ ನಿಗಧಿ ಮಾಡಿರುವ ಕೆಲಸದ ವೇಳೆಗಿಂತ ಹೆಚ್ಚಿನ ಅವಧಿ ಕೆಲಸ ಮಾಡಿದ್ದಲ್ಲಿ ಅಂತಹ ಕಾರ್ಮಿಕನಿಗೆ 2 ಪಟ್ಟು ವೇತನ ನೀಡತಕ್ಕದ್ದು.
5. ಗ್ರಾಹಕರ ರಕ್ಷಣೆ ಹಾಗೂ ಕಾನೂನು ಸುವ್ಯವಸ್ಥೆಯ ಬಗ್ಗೆ ಸ್ಥಳಿಯ ಪೋಲೀಸ್‌ರೊಂದಿಗೆ ಚರ್ಚಿಸಿ, ಸೂಕ್ತ ಕ್ರಮ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಎನ್.ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಆಗಸ್ಟ್ ೧೮, ೨೦೦೯ (ಶ್ರಾವಣ ೨೭, ಶಕ ವರ್ಷ ೧೯೩೧) | ನಂ. ೭೧೧ |
|---|---|---|

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 30 ಶಾಸನ 2009, ಬೆಂಗಳೂರು, ದಿನಾಂಕ: 18ನೇ ಆಗಸ್ಟ್, 2009**

ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ವಿಧೇಯಕ, 2009ಕ್ಕೆ 2009ರ ಆಗಸ್ಟ್ ತಿಂಗಳ ಹದಿನಾಲ್ಕನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2009ರ ಕರ್ನಾಟಕ ಅಧಿನಿಯಮ ಸಂಖ್ಯೆ: 15 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2009ರ ಕರ್ನಾಟಕ ಅಧಿನಿಯಮ ಸಂಖ್ಯೆ:15**

(2009ರ ಆಗಸ್ಟ್ ಹದಿನೆಂಟನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2009**

(2009ರ ಆಗಸ್ಟ್ ಹದಿನಾಲ್ಕನೇ ದಿನಾಂಕದಂದು ರಾಜ್ಯಪಾಲರ ಅನುಮೋದನೆಯನ್ನು ಪಡೆಯಲಾಗಿದೆ)

ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000 ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000 ನ್ನು (2001ರ ಕರ್ನಾಟಕ ಅಧಿನಿಯಮ 29) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು **ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2009** ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.-** ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ದ (2001ರ ಕರ್ನಾಟಕ ಅಧಿನಿಯಮ 29) (ಇದರಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 3ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ,-

(1) (ಡಿ) ಖಂಡದಲ್ಲಿ, "ಚಿತ್ರದುರ್ಗ, ದಾವಣಗೆರೆ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(2) (1ಬಿ) ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(1ಸಿ) ದಾವಣಗೆರೆಯಲ್ಲಿ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿದ್ದು ದಾವಣಗೆರೆ ಹಾಗೂ ಚಿತ್ರದುರ್ಗ ಜಿಲ್ಲೆಗಳ ಅಧಿಕಾರ ಕ್ಷೇತ್ರ ವ್ಯಾಪ್ತಿಯನ್ನು ಹೊಂದಿರುವ ದಾವಣಗೆರೆ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸತಕ್ಕದ್ದು."

**3. 5ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 5ನೇ ಪ್ರಕರಣದಲ್ಲಿ (3)ನೇ ಉಪಪ್ರಕರಣದ ತರುವಾಯ ಈ ಮುಂದಿನ ಉಪ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:-

"(4) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದ ದಿನಾಂಕಕ್ಕೆ ಮೊದಲು ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳಲ್ಲಿ ಸ್ಥಾಪನೆಗೊಂಡ ಯಾವುದೇ ಕಾಲೇಜು ಅಥವಾ ಶೈಕ್ಷಣಿಕ ಸಂಸ್ಥೆಯು, ಕುವೆಂಪು ವಿಶ್ವವಿದ್ಯಾನಿಲಯದಿಂದ ಅನುಭವಿಸುತ್ತಿರುವ ಯಾವುದೇ ವಿಶೇಷಾಧಿಕಾರವನ್ನು ಈ ಸಂಬಂಧದಲ್ಲಿ ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರುವಂತೆ ಹಿಂತೆಗೆದುಕೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಕುವೆಂಪು ವಿಶ್ವವಿದ್ಯಾನಿಲಯದ ವಿಶೇಷಾಧಿಕಾರಗಳಿಗೆ ಈ ಹಿಂದೆ ಪ್ರವೇಶ ಪಡೆದುಕೊಂಡಿದ್ದ ಅಥವಾ ಸಂಯೋಜಿತವಾಗಿದ್ದ,

ಎಲ್ಲ ಅಂಥ ಕಾಲೇಜುಗಳು ಅಥವಾ ಶೈಕ್ಷಣಿಕ ಸಂಸ್ಥೆಗಳು ದಾವಣಗೆರೆ ವಿಶ್ವವಿದ್ಯಾನಿಲಯದ ವಿಶೇಷಾಧಿಕಾರಗಳಿಗೆ ಪ್ರವೇಶ ಪಡೆದುಕೊಂಡಿವೆ ಎಂದು ಅಥವಾ ಅದಕ್ಕೆ ಸಂಯೋಜಿತವಾಗಿವೆ ಎಂದು ಭಾವಿಸತಕ್ಕದ್ದು."

**4. 14ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 14ನೇ ಪ್ರಕರಣದಲ್ಲಿ, (4)ನೇ ಉಪಪ್ರಕರಣದ ನಾಲ್ಕನೇ ಪರಂತುಕದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

"ಮತ್ತೂ ಪರಂತು, ಈ ಪ್ರಕರಣದಲ್ಲಿ ವಿರುದ್ಧವಾದುದು ಏನೇ ಇದ್ದರೂ, ರಾಜ್ಯ ಸರ್ಕಾರವು, ತಾನು ನಿರ್ದಿಷ್ಟಪಡಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು ದಾವಣಗೆರೆ ವಿಶ್ವವಿದ್ಯಾನಿಲಯದ ಪ್ರಥಮ ಕುಲಪತಿಯವರನ್ನು ನೇಮಕಮಾಡತಕ್ಕದ್ದು."

**5. ವಿಶೇಷಾಧಿಕಾರಿಯ ಅಧಿಕಾರಗಳು.-** ದಾವಣಗೆರೆ ವಿಶ್ವವಿದ್ಯಾನಿಲಯದ ಸ್ಥಾಪನೆಗಾಗಿ ಕ್ರಮ ಕೈಗೊಳ್ಳುವ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ನೇಮಕಮಾಡಿದ ವಿಶೇಷಾಧಿಕಾರಿಯು, ಪ್ರಥಮ ಕುಲಪತಿಯವರ ನೇಮಕವಾಗುವವರೆಗೆ, ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ವಿಶ್ವವಿದ್ಯಾನಿಲಯದ ಮತ್ತು ಕುಲಪತಿಯವರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**6. ಪ್ರಥಮ ಕುಲಪತಿಯವರ ಕರ್ತವ್ಯಗಳು.-** (1) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದಿಂದ ಆರು ತಿಂಗಳುಗಳೊಳಗೆ ಅಥವಾ ಕುಲಾಧಿಪತಿಯವರು ನಿರ್ದೇಶಿಸಬಹುದಾದಂತೆ ಒಂದು ವರ್ಷಕ್ಕೆ ಮೀರದಂಥ ದೀರ್ಘ ಅವಧಿಯೊಳಗೆ, ದಾವಣಗೆರೆ ವಿಶ್ವವಿದ್ಯಾನಿಲಯದ ಸಿಂಡಿಕೇಟ್, ವಿದ್ಯಾವಿಷಯಕ ಪರಿಷತ್ತು ಮತ್ತು ಇತರ ಪ್ರಾಧಿಕಾರಗಳ ರಚನೆಗಾಗಿ ಏರ್ಪಾಡುಗಳನ್ನು ಮಾಡುವುದು ಪ್ರಥಮ ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ರಚಿತವಾದ ಪ್ರಾಧಿಕಾರಗಳು, ಈ ಸಂಬಂಧದಲ್ಲಿ ಕುಲಾಧಿಪತಿಯವರು ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಂದು ತಮ್ಮ ಪ್ರಕಾರ್ಯಗಳನ್ನು ಚಲಾಯಿಸಲು ಪ್ರಾರಂಭಿಸತಕ್ಕದ್ದು.

**7. ತಾತ್ಕಾಲಿಕ ಉಪಬಂಧಗಳು.-** (1) ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಏನೇ ಇದ್ದರೂ, ಪ್ರಥಮ ಕುಲಪತಿಯವರು, ಕುಲಾಧಿಪತಿಯವರ ಪೂರ್ವಾನುಮೋದನೆಯೊಂದಿಗೆ ಈ ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ, ದಾವಣಗೆರೆ ವಿಶ್ವವಿದ್ಯಾನಿಲಯದ ಎಲ್ಲಾ ಅಥವಾ ಯಾವುವೇ ಪ್ರಕಾರ್ಯಗಳನ್ನು ನಿರ್ವಹಿಸಬಹುದು ಮತ್ತು ಆ ಉದ್ದೇಶಕ್ಕಾಗಿ ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಉಪಬಂಧಿಸಲಾದಂತೆ ವಿಶ್ವವಿದ್ಯಾನಿಲಯದ ಯಾವುದೇ ಪ್ರಾಧಿಕಾರವು, ಚಲಾಯಿಸಬೇಕಾಗಿದ್ದ ಅಥವಾ ನಿರ್ವಹಿಸಬೇಕಾಗಿದ್ದ ಯಾವುವೇ ಅಧಿಕಾರವನ್ನು ಅಥವಾ ಕರ್ತವ್ಯವನ್ನು, ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಉಪಬಂಧಿಸಿರುವಂತೆ ಅದು ಅಸ್ತಿತ್ವಕ್ಕೆ ಬರುವವರೆಗೆ, ಚಲಾಯಿಸಬಹುದು ಅಥವಾ ನಿರ್ವಹಿಸಬಹುದು.

(2) ಮೂಲ ಅಧಿನಿಯಮದ 5ನೇ ಪ್ರಕರಣದ ಅಡಿಯಲ್ಲಿ ದಾವಣಗೆರೆ ವಿಶ್ವವಿದ್ಯಾನಿಲಯಕ್ಕೆ ಸಂಯೋಜಿಸಲಾದ ಕಾಲೇಜುಗಳಿಗೆ ಅಥವಾ ಇತರ ಶಿಕ್ಷಣ ಸಂಸ್ಥೆಗಳಿಗೆ ಅನ್ವಯವಾಗತಕ್ಕ ಕುವೆಂಪು ವಿಶ್ವವಿದ್ಯಾನಿಲಯವು ರಚಿಸಿದ ಎಲ್ಲ ಪರಿನಿಯಮಗಳು, ಆರ್ಡಿನೆನ್ಸ್‌ಗಳು, ವಿನಿಯಮಗಳು ಮತ್ತು ನಿಯಮಗಳನ್ನು ದಾವಣಗೆರೆ ವಿಶ್ವವಿದ್ಯಾನಿಲಯವು ರಚಿಸಿದ ಪರಿನಿಯಮಗಳು, ಆರ್ಡಿನೆನ್ಸ್‌ಗಳು, ವಿನಿಯಮಗಳು ಮತ್ತು ನಿಯಮಗಳೆಂದು ಭಾವಿಸತಕ್ಕದ್ದು ಮತ್ತು ಅವು ದಾವಣಗೆರೆ ವಿಶ್ವವಿದ್ಯಾನಿಲಯವು ತನ್ನದೇ ಆದ ಪರಿನಿಯಮಗಳು, ಆರ್ಡಿನೆನ್ಸ್‌ಗಳು, ವಿನಿಯಮಗಳು ಅಥವಾ ನಿಯಮಗಳನ್ನು ರಚಿಸುವವರೆಗೆ ಹಾಗೆಯೇ ಮುಂದುವರಿಯತಕ್ಕದ್ದು:

ಪರಂತು, ಕುಲಪತಿಯವರು, ಕುಲಾಧಿಪತಿಯವರ ಅನುಮೋದನೆಯೊಡನೆ ತಾವು ಅವಶ್ಯಕವೆಂದು ಪರಿಗಣಿಸಬಹುದಾದಂಥ ಮಾರ್ಪಾಡುಗಳನ್ನು ಅಥವಾ ಅಳವಡಿಕೆಗಳನ್ನು ಅದರಲ್ಲಿ ಮಾಡಬಹುದು.

**8. ಕೆಲವು ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಉಳಿಸುವಿಕೆ.-** ತಿದ್ದುಪಡಿ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಅಥವಾ ತಿದ್ದುಪಡಿ ಅಧಿನಿಯಮದ ಪ್ರಾರಂಭದ ನಿಕಟಪೂರ್ವದಲ್ಲಿ ಅದರ ಅಡಿಯಲ್ಲಿ ರಚಿಸಿದ ಪರಿನಿಯಮಗಳಲ್ಲಿ, ಆರ್ಡಿನೆನ್ಸ್‌ಗಳಲ್ಲಿ, ವಿನಿಯಮಗಳಲ್ಲಿ ಅಥವಾ ನಿಯಮಗಳಲ್ಲಿ ಏನೇ ಇದ್ದರೂ,-

(ಎ) ಜಾರಿಯಲ್ಲಿರುವ ಪರಿನಿಯಮಗಳಿಗೆ, ಆರ್ಡಿನೆನ್ಸ್‌ಗಳಿಗೆ, ವಿನಿಯಮಗಳಿಗೆ ಅಥವಾ ನಿಯಮಗಳಿಗೆ ಅನುಸಾರವಾಗಿ, ಕುವೆಂಪು ವಿಶ್ವವಿದ್ಯಾನಿಲಯದ ಪದವಿಗಾಗಿ ವ್ಯಾಸಂಗ ಮಾಡುತ್ತಿರುವ ಯಾವೊಬ್ಬ ವಿದ್ಯಾರ್ಥಿಯು, ದಾವಣಗೆರೆ ವಿಶ್ವವಿದ್ಯಾನಿಲಯವು ಅಂಥ ಪರೀಕ್ಷೆಯನ್ನು ವ್ಯವಸ್ಥೆಗೊಳಿಸುವವರೆಗೆ, ಕುವೆಂಪು ವಿಶ್ವವಿದ್ಯಾನಿಲಯದ ಪರೀಕ್ಷೆಗೆ ಪ್ರವೇಶ ಪಡೆಯತಕ್ಕದ್ದು ಮತ್ತು ಅಂಥ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ಅವನು ಅರ್ಹನಾಗುವ ಪದವಿ ಅಥವಾ ಡಿಪ್ಲೋಮಾವನ್ನು ಅವನಿಗೆ ಪ್ರದಾನ ಮಾಡತಕ್ಕದ್ದು.

(ಬಿ) ಕುವೆಂಪು ವಿಶ್ವವಿದ್ಯಾನಿಲಯವು ಯಾವುದೇ ಪರೀಕ್ಷೆಯನ್ನು ನಡೆಸಿದ್ದು, ಅದರ ಫಲಿತಾಂಶವು ಪ್ರಕಟವಾಗಿ ಅದಕ್ಕೆ ಸಂಬಂಧಪಟ್ಟ ಪದವಿ ಅಥವಾ ಡಿಪ್ಲೋಮಾವನ್ನು ಪ್ರದಾನ ಮಾಡಿರದಿದ್ದರೆ ಅಥವಾ ನೀಡಿರದಿದ್ದರೆ ಅಥವಾ ಅಂಥ ಯಾವುದೇ ಪರೀಕ್ಷೆಯ ಫಲಿತಾಂಶವನ್ನು ಕುವೆಂಪು ವಿಶ್ವವಿದ್ಯಾನಿಲಯವು ಪ್ರಕಟಿಸಿರದಿದ್ದರೆ, ಆಗ ಅಂಥ ಪರೀಕ್ಷೆಯನ್ನು ಕುವೆಂಪು ವಿಶ್ವವಿದ್ಯಾನಿಲಯವು ನಡೆಸಿದೆ ಎಂದು ಭಾವಿಸತಕ್ಕದ್ದು.

**9. ತೊಂದರೆಗಳ ನಿವಾರಣೆ.–** ತಿದ್ದುಪಡಿ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ ಅವಶ್ಯವೆಂದು ಅಥವಾ ಸೂಕ್ತವೆಂದು ತನಗೆ ಕಂಡುಬರಬಹುದಾದಂಥ ಉಪಬಂಧವನ್ನು ಸರ್ಕಾರಿ ರಾಜ್ಯ ಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ ರಚಿಸಬಹುದು:

ಪರಂತು, ಈ ತಿದ್ದುಪಡಿ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಎರಡು ವರ್ಷಗಳ ಅವಧಿ ಮುಕ್ತಾಯವಾದ ತರುವಾಯ ಅಂಥ ಯಾವ ಆದೇಶವನ್ನೂ ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಆಗಸ್ಟ್ ೧೮, ೨೦೦೯ (ಶ್ರಾವಣ ೨೭, ಶಕ ವರ್ಷ ೧೯೩೧) | ನಂ. ೭೧೨ |
| --- | --- | --- |

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 5 SCR 2009, Bangalore, Dated : 17th August, 2009**

Whereas the draft of the Karnataka Civil Services (Direct Recruitment by Competitive Examinations and Selections) (General) (Amendment) Rules, 2009 was published as required by clause (a) of sub-section (2) of section 3 read with section 8 of the Karnataka State Civil Services Act, 1978 (Karnataka Act 14 of 1990) in Notification No. DPAR 5 SCR 2009 dated 24th July 2009 and in Part IV-A of the Karnataka Gazette Extra-ordinary dated 25th July 2009 inviting objections and suggestions from all persons likely to be affected thereby within fifteen days from the date of publiction of the draft in the Official Gazette.

Whreas, the said Gazette was made available to the public on 25th July 2009.

And whereas no objections and suggestions have been received by the State Government.

Now, therefore, in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rules, namely :-

**RULES**

**1. Title and Commencement :-** (1) These rules may be called the Karnataka Civil Services (Direct Recruitment by Competitive Examinations and Selection) (General) (Amendment) Rules, 2009.

(2) They shall come into force on the date of their publication in the Official Gazette.

**2. Amendment of Rule 6 :-** In the Karnataka Civil Services Direct Recruitment by Competitive Examinations and Selection) (General) Rules, 2006 in rule 6,-

(i) In clause (A) in sub-clause (v) for the words "five times" the words "three times" shall be substituted; and

(ii) In clause (B), in sub-clause (iii) for the words "five times" the words "three times" shall be substituted.

By Order and in the name of the Governor of Karnataka,

**P. MARKANDEYA**
Under Secretary to Government
Department of Personnel and
Administrative Reforms (Services Rules – II)

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಆಗಸ್ಟ್ ೧೯, ೨೦೦೯ (ಶ್ರಾವಣ ೨೮, ಶಕ ವರ್ಷ ೧೯೩೧) | ನಂ. ೭೧೩ |
|---|---|---|

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**1897ರ ಜನರಲ್ ಕ್ಲಾಜಸ್ ಕಾಯ್ದೆಯ ಕಲಂ 21ರ ಮೇರೆಗೆ ಅಧಿಸೂಚನೆ**

**ಸಂಖ್ಯೆ: ಸಿಐ 103 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ: 19ನೇ ಆಗಸ್ಟ್, 2009**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966 ಕರ್ನಾಟಕ ಕಾಯ್ದೆ 18, 1966) ಕಲಂ 4ರನ್ವಯ ಅಧಿಸೂಚನೆ ಸಂ. ಸಿಐ 103 ಎಸ್‌ಪಿಕ್ಯೂ 2008, ದಿನಾಂಕ: 10.11.2008ರಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೆಂಗೇರಿ ಮತ್ತು ದೊಡ್ಡಬೆಲೆ ಗ್ರಾಮಗಳಲ್ಲಿ ಒಟ್ಟು 29 ಎಕರೆ ವಿಸ್ತೀರ್ಣವುಳ್ಳ ಅನುಬಂಧದಲ್ಲಿರುವ ಸರ್ವೆ ನಂಬರ್‌ಗಳ ಜಮೀನಿಗೆ ಅನ್ವಯವಾಗುವಂತೆ ಭೂಸ್ವಾಧೀನ ಪ್ರಕ್ರಿಯೆಯಿಂದ ಕೈಬಿಡಲು ಹೊರಡಿಸಲಾದ ಅಧಿಸೂಚನೆಯನ್ನು 1897ರ ಜನರಲ್ ಕ್ಲಾಜಸ್ ಕಾಯ್ದೆಯ ಕಲಂ 21ರನ್ವಯ ವಿರಹಿತವಾಗಿರುವ ಅಧಿಕಾರದ ಮೇರೆಗೆ ರದ್ದುಪಡಿಸಿ (rescind) ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ(ಕೈಅ.)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**[ಆದೇಶ ಸಂ. ಸಿಐ 103 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ: 19.08.2009ಕ್ಕೆ]**

**ಅನುಬಂಧ**

| ಕ್ರ. ಸಂ. | ಗ್ರಾಮ | ಸರ್ವೆ ನಂ. | ವಿಸ್ತೀರ್ಣ ಎ–ಗು |
|---|---|---|---|
| 1. | ಕೆಂಗೇರಿ | 118 | 7–18 |
| | | 119/1 | 7–37 |
| | | 119/2 | 4–18 |
| | | 117/2 | 2–32 |
| 2 | ದೊಡ್ಡಬೆಲೆ | 8/1 ರ ಪೈಕಿ | 6–15 |
| **ಒಟ್ಟು** | | | **29–00** |

**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ(ಕೈಅ.)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

# ವಿಶೇಷ ಪತ್ರಿಕೆ

| ಭಾಗ – VI | ಬೆಂಗಳೂರು, ಬುಧವಾರ, ಆಗಸ್ಟ್ ೧೯, ೨೦೦೯ (ಶ್ರಾವಣ ೨೮, ಶಕ ವರ್ಷ ೧೯೩೧) | ನಂ. ೭೧೪ |
|---|---|---|

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಅಧಿಸೂಚನೆ**

**ಸಂಖ್ಯೆ : ಚು/ವಿವ 5(9)/93–94, ದಿನಾಂಕ: 19ನೇ ಆಗಸ್ಟ್, 2009**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಕಲಂ 4(2) ರಲ್ಲಿ ಅಗತ್ಯ ಪಡಿಸಿದಂತೆ ಈ ಕಛೇರಿಯ ಅಧಿಸೂಚನೆ ಕ್ರಮಾಂಕ ಗ್ರಾಪಂ/ಚು/ವಿವ 5(9)/93–04 ದಿನಾಂಕ 26.8.2008 ರಂತೆ ಚಿನ್ನೇನಹಳ್ಳಿ ಗ್ರಾಮಪಂಚಾಯಿತಿಯ ದಿನಾಂಕ 13.4.2007 ರ ನಡವಳಿಯಂತೆ ಚಿನ್ನೇನಹಳ್ಳಿ ಗ್ರಾಮದ ಬದಲಾಗಿ ಬ್ರಹ್ಮಸಂದ್ರ ಗ್ರಾಮವನ್ನು ಚಿನ್ನೇನಹಳ್ಳಿ ಗ್ರಾಮಪಂಚಾಯಿತಿಯ ಕೇಂದ್ರ ಸ್ಥಾನವನ್ನಾಗಿ ಮಾಡುವ ಬಗ್ಗೆ ಏನಾದರೂ ಆಕ್ಷೇಪಣೆ ಇದ್ದಲ್ಲಿ ಅಧಿಸೂಚನೆಯ ದಿನಾಂಕದಿಂದ

15 ದಿನಗಳೊಳಗೆ ಲಿಖಿತವಾಗಿ ಖುದ್ದಾಗಿ ಅಥವಾ ಅಂಚೆ ಮೂಲಕ ತುಮಕೂರು ಜಿಲ್ಲಾಧಿಕಾರಿಗಳ ಕಛೇರಿಗೆ ತಲುಪಿಸಲು ತಿಳಿಸಲಾಗಿತ್ತು.

ಸದರಿ ಅಧಿಸೂಚನೆಯನ್ನು ದಿ: 26.8.2008 ರಂದು ಚಿನ್ನೇನಹಳ್ಳಿ ಗ್ರಾಮಪಂಚಾಯಿತಿ ಕಛೇರಿ, ಶಿರಾ ತಾಲ್ಲೂಕು ಪಂಚಾಯಿತಿ ಕಛೇರಿ, ಶಿರಾ ತಾಲ್ಲೂಕು ಕಛೇರಿಗಳಲ್ಲಿ ಪ್ರಕಟಿಸುವ ಮೂಲಕ ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದೆ.

ದಿ: 26.8.2008 ರ ಅಧಿಸೂಚನೆಗೆ ಸಲ್ಲಿಸಿದ ಆಕ್ಷೇಪಣೆಗಳ ಬಗ್ಗೆ ಆಕ್ಷೇಪಣೆದಾರರಿಗೆ, ಸುನಾವಣೆ ಅವಕಾಶ ನೀಡಿ ವಿಚಾರಣೆ ನಡೆಸಿ, ಈ ನ್ಯಾಯಾಲಯದ ಆದೇಶ ನಂ. ಚು/ವಿವ 5(9)/93–94 ದಿ: 17.8.2009 ರಂತೆ ಸದರಿ ಆದೇಶದಲ್ಲಿ ಹೇಳಿದ ಕಾರಣಗಳಿಂದ ಆಕ್ಷೇಪಣೆಗಳನ್ನು ತಳ್ಳಿಹಾಕಿ ಚಿನ್ನೇನಹಳ್ಳಿ ಗ್ರಾಮಪಂಚಾಯಿತಿಯ ದಿ: 13.4.2007 ರ ನಡವಳಿಯಂತೆ ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಕಲಂ 4(2) (ಸಿ) ರಡಿ ದತ್ತವಾದ ಅಧಿಕಾರದ ಮೇರೆ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಶಿರಾ ಇವರ ನ್ಯಾಯಾಲಯದಲ್ಲಿ ಇತ್ಯರ್ಥಕ್ಕೆ ಬಾಕಿ ಇರುವ ಮೂಲ ದಾವೆ ಸಂಖ್ಯೆ 269/08 ರಲ್ಲಿಯ ಅಂತಿಮ ಆದೇಶಕ್ಕೆ ಒಳಪಟ್ಟು ಚಿನ್ನೇನಹಳ್ಳಿ ಗ್ರಾಮ ಪಂಚಾಯಿತಿಯ ಕೇಂದ್ರಸ್ಥಾನವನ್ನು ಚಿನ್ನೇನಹಳ್ಳಿಯಿಂದ ಬ್ರಹ್ಮಸಂದ್ರ ಗ್ರಾಮಕ್ಕೆ ಬದಲಾಯಿಸಲು ಅಧಿಸೂಚನೆ ಹೊರಡಿಸಲು ಆದೇಶಿಸಲಾಗಿದೆ.

ಆದುದರಿಂದ ಈಗ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ 1993ರ ಕಲಂ 4 (2) (ಸಿ) ರಡಿ ದತ್ತವಾದ ಅಧಿಕಾರದ ಮೇರೆ ದಿ: 13.4.07ರ ಚಿನ್ನೇನಹಳ್ಳಿ ಗ್ರಾಮಪಂಚಾಯಿತಿಯ ನಡವಳಿಯಂತೆ ಚಿನ್ನೇನಹಳ್ಳಿ ಗ್ರಾಮ ಪಂಚಾಯಿತಿಯ ಕೇಂದ್ರ ಸ್ಥಾನವನ್ನು ಚಿನ್ನೇನಹಳ್ಳಿಯಿಂದ ಬ್ರಹ್ಮಸಂದ್ರ ಗ್ರಾಮಕ್ಕೆ ಈ ತಕ್ಷಣದಿಂದ ಜ್ಯಾರಿಗೆ ಬರುವಂತೆ ಬದಲಾಯಿಸಲಾಗಿದೆ ಎಂದು ಈ ಮೂಲಕ ಅಧಿಸೂಚಿಸಿದೆ.

**ಡಾ: ಸಿ. ಸೋಮಶೇಖರ ಐ.ಎ.ಎಸ್.,**
ಜಿಲ್ಲಾಧಿಕಾರಿಗಳು
ತುಮಕೂರು ಜಿಲ್ಲೆ.

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಆಗಸ್ಟ್ ೨೦, ೨೦೦೯ (ಶ್ರಾವಣ ೨೯, ಶಕ ವರ್ಷ ೧೯೩೧) | ನಂ. ೭೧೫ |
| --- | --- | --- |

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂ. ಡಿಸಿಎ 7 ಎಆರ್‌ಬಿ 2009, ಬೆಂಗಳೂರು, ದಿನಾಂಕ : 17ನೇ ಆಗಸ್ಟ್, 2009**

ಭಾರತ ಸಂವಿಧಾನದ 166ನೇ ಅನುಚ್ಛೇದದ ಕಲಂ (2) ಮತ್ತು (3) ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು, 1977, ಇದಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಕೆಳಕಂಡ ನಿಯಮಗಳನ್ನು ಈ ಮೂಲಕ ರಚಿಸಿದ್ದಾರೆ, ಎಂದರೆ :–

**1. ಶೀರ್ಷಿಕೆ ಮತ್ತು ಪ್ರಾರಂಭ :–** (1) ಈ ನಿಯಮಗಳನ್ನು ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) (ತಿದ್ದುಪಡಿ) ನಿಯಮಗಳು, 2009 ಎಂದು ಕರೆಯತಕ್ಕದ್ದು.

(2) ಇವುಗಳು ದಿನಾಂಕ 5ನೇ ಆಗಸ್ಟ್ 2008 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರತಕ್ಕದ್ದೆಂದು ಭಾವಿಸತಕ್ಕದ್ದು.

**2. ಅನುಸೂಚಿ II ಕ್ಕೆ ತಿದ್ದುಪಡಿ :–** 1977 ರ ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳಲ್ಲಿನ II ರ ಅನುಸೂಚಿಯಲ್ಲಿ ""**ಎಲ್. ಆಡಳಿತ ಸುಧಾರಣೆ"** ಶೀರ್ಷಿಕೆ ಮತ್ತು ಅದರಡಿಯಲ್ಲಿನ ನಮೂದುಗಳ ನಂತರ, ಈ ಕೆಳಕಂಡ ಶೀರ್ಷಿಕೆ ಮತ್ತು ನಮೂದುಗಳನ್ನು ಸೇರ್ಪಡೆ ಮಾಡತಕ್ಕದ್ದು, ಎಂದರೆ :–

""**ಎಂ. ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ.**

(i) ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇದಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳು"

ಕರ್ನಾಟಕ ರಾಜ್ಯಪಾಲರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಮಾರ್ಕಂಡೇಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು – 2)

## PERSONNEL AND ADMINISTRATIVE REFORMS SECRETARIAT

## NOTIFICATION

**No. DCA 7 ARB 2009, Bangalore, Dated : 17th August, 2009**

In exercise of the powers conferred by clauses (2) and (3) of Article 166 of the Constitution of India, the Governor of Karnataka hereby makes the following rules further to amend the Karnataka Government (Allocation of Business) Rules, 1977, namely :-

**1. Title and Commencement :-** 1) These rules may be called the Karnataka Government (Allocation of Business) (Amendment) Rules, 2009.

2) They shall be deemed to have come into force with effect from Fifth day of August, 2008.

**2. Amendment o Schedule II :-** In Schedule II to the Karnataka Government (Allocation of Business) Rules, 1977, after the heading "L. Administrative Reforms" and the entries thereunder, the following heading and the entries shall be inserted, namely :-

**"M. Non-Resident Indians Committee, Karnataka.**

(i) All matters relating to Non-Resident Indians Committee, Karnataka"

GOVERNOR OF KARNATAKA

By order and in the name of the Governor of Karnataka,

**P. MARKANDEYA**
Under Secretary to Government,
Department of Personnel and Administrative Reforms
(Service Rules – 2)

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಆಗಸ್ಟ್ ೨೦, ೨೦೦೯ (ಶ್ರಾವಣ ೨೯, ಶಕ ವರ್ಷ ೧೯೩೧) | ನಂ. ೭೧೬ |
|---|---|---|

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಲೋಇ 64 ಸೇಸಕಿ 09, ಬೆಂಗಳೂರು, ದಿನಾಂಕ: 20ನೇ ಆಗಸ್ಟ್, 2009**

ಲೋಕೋಪಯೋಗಿ ಇಲಾಖೆ, ಮತ್ತು ಜಲ ಸಂಪನ್ಮೂಲ ಇಲಾಖೆಯ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಬಡಪ್ಪನವರ ಪ್ರಕರಣದ ಹಿನ್ನೆಲೆಯಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನದಂತೆ ಸರ್ಕಾರಿ ಅಧಿಸೂಚನೆ ಸಂಖ್ಯೆ:ಪಿಡಬ್ಲ್ಯೂಡಿ:80:ಎಸ್‌ಪಿಎನ್:2001 ದಿನಾಂಕ 18–8–2001ರಲ್ಲಿ ಹೊರಡಿಸಲಾಗಿತ್ತು. ತದನಂತರ 2001ರ ಸಂವಿಧಾನದ 85ನೇ ತಿದ್ದುಪಡಿಯನ್ವಯ ರಾಜ್ಯ ಸರ್ಕಾರವು `The Karntaka Determination of Seniorty of the Government Servants Promoted on the basis of Reservation (to the posts in Civil Services of the State) Act, 2002`ನ್ನು ರಚಿಸಿದ್ದು, ಸದರಿ ಅಧಿನಿಯಮದ ಉಪಬಂಧಗಳನ್ವಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ಬಡ್ತಿಯಲ್ಲಿ ದಿನಾಂಕ 27–4–1978ರಿಂದ ಮೀಸಲಾತಿ ಅವಕಾಶವನ್ನು ಕಲ್ಪಿಸಲಾಗಿದೆ. ನಂತರ ಮಾನ್ಯ ಸರ್ವೋಚ್ಚ ನ್ಯಾಯಾಲಯವು ರಿಟ್ ಅರ್ಜಿ (ಸಿವಿಲ್) ಸಂಖ್ಯೆ:61–62/2002 ಹಾಗೂ ಇತರೆ ಪ್ರಕರಣಗಳಲ್ಲಿ ನೀಡಿದ ದಿನಾಂಕ.8–4–2002ರ ಮಧ್ಯಂತರ ಆದೇಶದನ್ವಯ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ಪ್ರಾವಿಜನಲ್ ಜೇಷ್ಠತಾ ಪಟ್ಟಿಯನ್ನು ದಿನಾಂಕ 1–3–2002ಕ್ಕೆ ಕೊನೆಗೊಂಡಂತೆ ತಯಾರಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ:ಪಿಡಬ್ಲ್ಯೂಡಿ: 108:ಎಸ್‌ಪಿಎನ್: 2002 ದಿನಾಂಕ 11–4–2002ರಲ್ಲಿ ಹೊರಡಿಸಲಾಗಿರುತ್ತದೆ. ತದನಂತರ ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:58:ಸೇಸಕಿ:08 ದಿನಾಂಕ 7–5–2008ರಲ್ಲಿ ದಿನಾಂಕ 1–3–2002ರಿಂದ 31–3–2008ಕ್ಕೆ ಕೊನೆಗೊಂಡಂತೆ ಸದರಿ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ)ಗಳ ಹೆಸರುಗಳನ್ನು ಈಗಾಗಲೇ ಮೇಲೆ ತಿಳಿಸಿದ ದಿನಾಂಕ 11–4–2002ರ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಪ್ರಕಟಿಸಲಾಗಿದ್ದ ಕ್ರಮ ಸಂಖ್ಯೆ 2898 ರಿಂದ ಮುಂದುವರಿಸಿ ಕ್ರಮ ಸಂಖ್ಯೆ 2899ರಿಂದ 3595ರವರೆಗೆ ಸೇರ್ಪಡೆ ಮಾಡಿದ ಪಟ್ಟಿಯನ್ನು ಹೊರಡಿಸಲಾಗಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಸಂಖ್ಯೆ: ಸಿಬಿಎಸ್ : 11 : ಕಿ.ಇಂ(ವಿದ) : ಜೇಷ್ಠತಾಪಟ್ಟಿ : ಇಎಸ್ಎಫ್: 2009–10 ದಿನಾಂಕ 13–8–2009ರ ಪತ್ರದಲ್ಲಿ ಲೋಕೋಪಯೋಗಿ ಹಾಗೂ ನೀರಾವರಿ ಇಲಾಖೆಯಲ್ಲಿನ ಕಿರಿಯ ಇಂಜಿನಿಯರ್‌ಗಳಿಗೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಹುದ್ದೆಗೆ ಜೇಷ್ಠತೆಯ ಅನುಸಾರ ಮುಂಬಡ್ತಿಗೆ ಪರಿಗಣಿಸುವ ಸಂದರ್ಭದಲ್ಲಿ 7 ಜನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಇವರುಗಳ ವಾರ್ಷಿಕ ರಹಸ್ಯ ವರದಿಗಳು ಹಾಗೂ ಇತರೆ ಮಾಹಿತಿಗಳು ಸಕಾಲದಲ್ಲಿ ದೊರೆಯದಿದ್ದ ಕಾರಣಕ್ಕಾಗಿ ಅವರ ಹೆಸರುಗಳನ್ನು ಮುಂಬಡ್ತಿಗೆ ಪರಿಗಣಿಸಲು ಸಾಧ್ಯವಾಗಿರುವುದಿಲ್ಲವೆಂದು, ಇದರಿಂದಾಗಿ ಆ ಸಂದರ್ಭದಲ್ಲಿ ಮಾಹಿತಿಯ ಅಲಭ್ಯತೆಯಿಂದ ಸೇವೆಯಲ್ಲಿ ಇವರಿಗಿಂತ ಕಿರಿಯರಾದ ಕಿರಿಯ ಇಂಜಿನಿಯರ್‌ಗಳಿಗೆ ಬಡ್ತಿಯನ್ನು ನೀಡಿರುವುದಾಗಿ ತಿಳಿಸಿ ಆ ನಂತರ ಸದರಿ ಕೈಬಿಟ್ಟ ಕಿರಿಯ ಇಂಜಿನಿಯರ್‌ಗಳ ಮಾಹಿತಿಗಳು ಲಭ್ಯವಾದ ನಂತರ ಅವರುಗಳಿಗೆ ದಿನಾಂಕ 26–2–2004, 28–5–2004, 28–7–2004 ಹಾಗೂ 22–6–2005ರಲ್ಲಿ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದಕ್ಕೆ ಬಡ್ತಿಗಳನ್ನು ನೀಡಲಾಗಿರುತ್ತದೆ. ಇದರಿಂದಾಗಿ ಸದರಿ ಸರ್ಕಾರದ ಅಧಿಸೂಚನೆ ಸಂಖ್ಯೆ:ಪಿಡಬ್ಲ್ಯೂಡಿ:108:ಎಸ್‌ಪಿಎನ್:2002 ದಿನಾಂಕ 11–4–2002ರಲ್ಲಿ ಹೊರಡಿಸಲಾದ ಜೇಷ್ಠತಾ ಪಟ್ಟಿಯಲ್ಲಿ ಸದರಿ ಕೈಬಿಟ್ಟಿದ್ದ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಇವರುಗಳ ಹಸರುಗಳು ಸೇರ್ಪಡೆಗೊಂಡಿರುವುದಿಲ್ಲ. ಪರಿಣಾಮವಾಗಿ, ಸೇವೆಯಲ್ಲಿ ಇವರಿಗಿಂತ ಕಿರಿಯರಾದ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ)ಗಳಿಗೆ ಈಗಾಗಲೇ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಿಭಾಗ–2 ವೃಂದಕ್ಕೂ ಸಹ ಬಡ್ತಿಯನ್ನು ನೀಡಲಾಗಿದ್ದು ವಾಸ್ತವವಾಗಿ ಸೇವಾ ಹಿರಿತನ ಹೊಂದಿರುವ ಸದರಿ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ)ಗಳು ಪದೋನ್ನತಿಯಿಂದ ವಂಚಿತರಾಗಿರುತ್ತಾರೆ ಎಂದು ತಿಳಿಸುತ್ತಾ ಸದರಿ 7 ಜನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ)ಗಳ ಹೆಸರನ್ನು ಸರ್ಕಾರವು ಈಗಾಗಲೇ ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ:108: ಎಸ್‌ಪಿಎನ್:2002 ದಿನಾಂಕ 11–4–2002ರ ತಾತ್ಕಾಲಿಕ ಪಟ್ಟಿಯಲ್ಲಿ ಅಳವಡಿಸುವ ಬಗ್ಗೆ ಶಿಫಾರಸ್ಸು ಮಾಡಿರುತ್ತಾರೆ. ಆ ಪ್ರಕಾರ ಮೇಲೆ ತಿಳಿಸಿದ ದಿನಾಂಕ 11–4–2002ರ ಅಧಿಸೂಚನೆಯಲ್ಲಿ ಕೈಬಿಟ್ಟು ಹೋಗಿದ್ದ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಇವರುಗಳ ಹೆಸರುಗಳನ್ನು ಸೇರ್ಪಡೆ ಮಾಡುವ ಬಗ್ಗೆ ಪರಿಶೀಲಿಸಲಾಗಿದೆ.

ಅಧಿಸೂಚನೆ ಸಂಖ್ಯೆ:ಸಿಬಿಎಸ್:2:ಜಿಡಿಎಲ್:ಇಎಸ್ಎಫ್:93 ದಿನಾಂಕ 1–12–1993ರಲ್ಲಿ ಪ್ರಕಟಪಡಿಸಲಾಗಿರುವ ಕಿರಿಯ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಹಿರಿಯರಾಗಿರುವ ಸದರಿ 7 ಜನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಇವರುಗಳ ಜೇಷ್ಠತೆಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಪಿಡಬ್ಲ್ಯೂಡಿ:108:ಎಸ್‌ಪಿಎನ್:2002 ದಿನಾಂಕ: 11–4–2002ರಲ್ಲಿ ಪ್ರಕಟಿಸಿರುವ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಲಿಕ ಜೇಷ್ಠತಾ ಪಟ್ಟಿಯಲ್ಲಿ ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

| Sl No. | J.E. Grd No. | Name of the Engineer | SC/ ST | Date of Birth | Actual Date of Promotion | Eligibility Date | Remar ks |
|---|---|---|---|---|---|---|---|
| 2662-A. | 5096 | SHIVAKUMAR H.P. | - | 10-6-1958 | 26-2-2004 | 25-9-2001 | - |
| 2666-A | 5101-A | PAWAR M.H. | - | 13-3-1959 | 26-2-2004 | 25-9-2001 | - |
| 2674-A | 5122 | S.G.LAKKU NDI | - | 22-8-1960 | 26-2-2004 | 25-9-2001 | - |
| 2675-A | 5125 | K.CHANDRA KANTH | - | 11-10-1953 | 26-2-2005 | 25-9-2001 | - |
| 2676-A | 5127 | A.N.KAMBLI | - | 1-8-1956 | 26-2-2004 | 25-9-2001 | - |
| 2676-B | 5134 | N.NAGARAJU | - | 30-5-1955 | 28-5-2004 | 25-9-2001 | - |
| 2687-A | 5169 | J.NARAYANAPPA | - | 1-6-1956 | 28-7-2004 | 25-9-2001 | - |

ಸದರಿ ತಿದ್ದುಪಡಿ ಆದೇಶ ಹೊರಡಿಸಲು ಉದ್ದೇಶಿಸಿರುವ ಕ್ರಮದಿಂದ ಭಾಧಿತರಾಗಬಹುದಾದ ನೌಕರರು/ ಅಧಿಕಾರಿಗಳು ಅವರ ಆಕ್ಷೇಪಣೆ/ಮನವಿಗಳಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕ 15 ದಿವಸದೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಖೆ, 3ನೇ ಮಹಡಿ, ವಿಕಾಸ ಸೌಧ, ಬೆಂಗಳೂರು ಇವರಿಗೆ ಸಲ್ಲಿಸಬಹುದಾಗಿರುತ್ತದೆ. ಈ ಅವಧಿ ಮುಗಿದ ನಂತರ ಸಲ್ಲಿಸಲ್ಪಡುವ ಯಾವುದೇ ಆಕ್ಷೇಪಣೆ ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಲೋಕೋಪಯೋಗಿ/ಜಲ ಸಂಪನ್ಮೂಲ ಇಲಾಖೆಯ ಇಂಜಿನಿಯರ್‌ಗಳ ಜೇಷ್ಠತೆಗೆ ಸಂಬಂಧಿಸಿದಂತೆ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಬಾಕಿ ಇರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ:61–62/2002 ಹಾಗೂ ಸಂಬಂಧಿತ ಪ್ರಕರಣಗಳಲ್ಲಿ ಹಾಗೂ ರಾಜ್ಯ ಉಚ್ಚ ನ್ಯಾಯಾಲಯ/ ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ನ್ಯಾಯಾಲಯದ ಮುಂದೆ

ಯಾವುದೇ ಪ್ರಕರಣಗಳೂ ಬಾಕಿ ಇದ್ದಲ್ಲಿ, ಅಂತಹ ಪ್ರಕರಣಗಳಲ್ಲಿ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿನ ಮೇರೆಗೆ ಹಾಗೂ ದಿನಾಂಕ 11–4–2002 ಮತ್ತು ದಿನಾಂಕ 7–5–2008ರ ಅಧಿಸೂಚನೆಗಳಲ್ಲಿ ಪ್ರಕಟಿಸಿರುವ ತಾತ್ಕಾಲಿಕ ಜೇಷ್ಠತಾ ಪಟ್ಟಿಗಳ ಪುನರ್ ಪರಿಷ್ಕರಣೆಗೆ ಒಳಪಟ್ಟಿರುತ್ತದೆ ಎಂಬ ಷರತ್ತು ಈ ಪ್ರಕರಣಕ್ಕೆ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಲಕ್ಷ್ಮೀನರಸಿಂಹಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

# ವಿಶೇಷ ಪತ್ರಿಕೆ


| ಭಾಗ – IV-A | ಬೆಂಗಳೂರು, ಶನಿವಾರ, ಆಗಸ್ಟ್ ೨೨, ೨೦೦೯ (ಶ್ರಾವಣ ೩೧, ಶಕ ವರ್ಷ ೧೯೩೧) | ನಂ. ೨೧೯ |
|---|---|---|


## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ. ನಅಇ 120 ಎಂಎಲ್‌ಆರ್ 2009, ಬೆಂಗಳೂರು, ದಿನಾಂಕ : 22ನೇ ಆಗಸ್ಟ್, 2009**

ಅಧಿಸೂಚನೆ ಸಂಖ್ಯೆ.ನಅಇ 92 ಎಂಎನ್‌ವೈ 2006 ದಿನಾಂಕ 16.1.2007ರಲ್ಲಿ ಬೆಂಗಳೂರು ಮಹಾನಗರಪಾಲಿಕೆ ವ್ಯಾಪ್ತಿಗೆ 7 ನಗರಸಭೆಗಳನ್ನು, 1 ಪುರಸಭೆಯನ್ನು ಹಾಗೂ 110 ನಗರೀಕರಣ ಗ್ರಾಮಗಳನ್ನು ಸೇರಿಸಿ ಬೃಹತ್ ಬೆಂಗಳೂರು ಮಹಾನಗರಪಾಲಿಕೆಯೆಂದು ಉದ್ಘೋಷಿಸಲಾಗಿದೆ.

ಕರ್ನಾಟಕ ಮಹಾನಗರಪಾಲಿಕೆ ಕಾಯ್ದೆ 1976ರ ಕಲಂ 21ರನ್ವಯ (Karnataka Act 14 of 1977) ಅನ್ನು ಓದಿಕೊಂಡಂತೆ ಕಲಂ 7 ಉಪ ಕಲಂ (1) (ಎ)ಗೆ ತಂದಿರುವ ತಿದ್ದುಪಡಿ ಅಧಿಸೂಚನೆ ಸಂಖ್ಯೆ.ಡಿಪಿಎಲ್ 21 ಶಾಸನ 2009 ದಿ:4.6.2009 ರನ್ವಯ ಸರ್ಕಾರದ ಆದೇಶ ಸಂಖ್ಯೆ.ನಅಇ 59 ಎಂಎಲ್‌ಅರ್ 2009 ದಿನಾಂಕ 4.6.2009 ಮತ್ತು ಸಂಖ್ಯೆ.ನಅಇ 59 ಎಂಎಲ್‌ಆರ್ 2009 (Part-1) ದಿನಾಂಕ 16.6.2009ರಲ್ಲಿ ಹೊರಡಿಸಿರುವ ಮಾರ್ಗಸೂಚಿಯನ್ವಯ ಸರ್ಕಾರವು ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ವಾರ್ಡ್‌ಗಳ ಕ್ಷೇತ್ರಗಳ ಪುನರ್ ವಿಂಗಡಣೆಯ ಅಧಿಸೂಚನೆ ಸಂಖ್ಯೆ.ನಅಇ 59 ಎಂಎಲ್‌ಆರ್ 2009 ದಿನಾಂಕ 15.07.2009ನ್ನು ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IV-Aರಲ್ಲಿ ದಿನಾಂಕ 15.07.2009ರಂದು ಪ್ರಕಟಿಸಿ ಆದೇಶ ಹೊರಡಿಸಲಾಗಿದೆ.

ಆದ್ದರಿಂದ, ಮೀಸಲಾತಿಗಳನ್ನು ನಿಗದಿಪಡಿಸುವ ಬಗ್ಗೆ ಸರ್ಕಾರವು ಆದೇಶ ಸಂಖ್ಯೆ.ನಅಇ 139 ಎಂಎಲ್‌ಆರ್ 2008 (ಭಾಗ) ದಿ:21.07.2009ರಲ್ಲಿ ಮಾರ್ಗಸೂಚಿಗಳನ್ನು ಹೊರಡಿಸಿದ್ದು, ಅದರನ್ವಯ ಸರ್ಕಾರವು ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಮಹಾನಗರಪಾಲಿಕೆ ಕಾಯ್ದೆ 1976ರ ಕಲಂ 21ರನ್ವಯ (Karnataka Act 14 of 1977) ಅನ್ನು ಓದಿಕೊಂಡಂತೆ ಕಲಂ 7 ಉಪ ಕಲಂ (1) (ಎ)ಗೆ ತಂದಿರುವ ತಿದ್ದುಪಡಿ ಅಧಿಸೂಚನೆ ಸಂಖ್ಯೆ.ಡಿಪಿಎಲ್ 21 ಶಾಸನ 2009 ದಿ:4.6.2009 ರನ್ವಯ ಈ ಸಂಬಂಧ ಈಗಾಗಲೇ ಹೊರಡಿಸಿರುವ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸುತ್ತಾ, ಕರ್ನಾಟಕ ಸರ್ಕಾರವು, ಈ ಕೆಳಕಂಡಂತೆ ನಿಗದಿಪಡಿಸಿದೆ.

1. ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ವಾರ್ಡುಗಳ ಸಂಖ್ಯೆ. 198 (ಒಂದು ನೂರು ತೊಂಭತ್ತೆಂಟು)
2. ಪ್ರತಿ ವಾರ್ಡಿನ ಕ್ರಮ ಸಂಖ್ಯೆ, ವಾರ್ಡ್ ಸಂಖ್ಯೆ ಹಾಗೂ ವಾರ್ಡಿನ ಹೆಸರನ್ನು ಅನುಬಂಧದ ಕಲಂ 2ರಲ್ಲಿ ವಿವರಿಸಲಾಗಿದೆ.
3. ಪ್ರತಿ ವಾರ್ಡುಗಳ ವಿಸ್ತೀರ್ಣದ ವಿವರವನ್ನು ಅಧಿಸೂಚನೆ ಸಂಖ್ಯೆ.ನಅಇ 59 ಎಂಎಲ್‌ಅರ್ 2009 ದಿನಾಂಕ 15.07.2009ರ ಅನುಬಂಧದ ಕಲಂ 3 ಮತ್ತು 4 ರಲ್ಲಿ ವಿವರಿಸಲಾಗಿದೆ.
4. ಪ್ರತಿ ವಾರ್ಡಿಗೆ ತಲಾ ಒಂದು ಸ್ಥಾನವನ್ನು ಮೀಸಲಿಡಲಾಗಿದೆ.
5. ಪ್ರತಿ ವಾರ್ಡಿಗೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ ಹಿಂದುಳಿದ ವರ್ಗ / ಸಾಮಾನ್ಯ ಸ್ಥಾನವನ್ನು ಮತ್ತು ಆಯಾ ವರ್ಗದ ಮಹಿಳೆಯರ ಸ್ಥಾನವನ್ನು ಅನುಬಂಧದ ಕಲಂ 4 ರಲ್ಲಿ ನಿಗದಿಪಡಿಸಲಾಗಿದೆ.

ಈ ಕರಡು ಅಧಿಸೂಚನೆಯನ್ನು ಅದರಿಂದ ಬಾಧಿತರಾಗಬಹುದಾದಂಥ ವ್ಯಕ್ತಿಗಳ ಅವಗಾಹನೆಗಾಗಿ ಈ ಮೂಲಕ ಪ್ರಕಟಿಸಲಾಗಿದೆ ಮತ್ತು ಕರಡು ಅಧಿಸೂಚನೆಯನ್ನು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ನಂತರ ದಿನಾಂಕ 31.08.2009 ರಿಂದ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ನೋಟೀಸನ್ನು ನೀಡಲಾಗಿದೆ. ಸದರಿ ಪ್ರಸ್ತಾವನೆ ಸಂಬಂಧ ಯಾವುದೇ ಆಕ್ಷೇಪಣೆಯನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ದಿನಾಂಕದವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ವಿಕಾಸ ಸೌಧ, ಬೆಂಗಳೂರು ಇವರಿಗೆ ಸಲ್ಲಿಸಬೇಕೆಂದು ಈ ಮೂಲಕ ಅಗತ್ಯಪಡಿಸಲಾಗಿದೆ.

**ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,**

ಕರ್ನಾಟಕ ಸರ್ಕಾರ
ನಗರಾಭಿವೃದ್ಧಿ ಇಲಾಖೆ

ಸಿ.ಆರ್.ರವೀಂದ್ರ
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

## ಅನುಬಂಧ

| ಕ್ರಮ ಸಂಖ್ಯೆ | ವಾರ್ಡ್ ಸಂಖ್ಯೆ | ವಾರ್ಡಿನ ಹೆಸರು | ಮೀಸಲಾತಿ |
|---|---|---|---|
| **1** | **2** | **3** | **4** |
| 1 | 1 | ಕೆಂಪೇಗೌಡ ವಾರ್ಡ್ | **ಸಾಮಾನ್ಯ** |
| 2 | 2 | ಚೌಡೇಶ್ವರಿ ವಾರ್ಡ್ | **ಸಾಮಾನ್ಯ** |
| 3 | 3 | ಅಟ್ಟೂರು | **ಹಿಂದುಳಿದ ವರ್ಗ – ಎ** |
| 4 | 4 | ಯಲಹಂಕ ಉಪನಗರ | **ಸಾಮಾನ್ಯ (ಮಹಿಳೆ)** |
| 5 | 5 | ಜಕ್ಕೂರು | **ಸಾಮಾನ್ಯ** |
| 6 | 6 | ಥಣಿಸಂದ್ರ | **ಹಿಂದುಳಿದ ವರ್ಗ – ಎ** |
| 7 | 7 | ಬ್ಯಾಟರಾಯನಪುರ | **ಸಾಮಾನ್ಯ** |
| 8 | 8 | ಕೊಡಿಗೇಹಳ್ಳಿ | **ಸಾಮಾನ್ಯ (ಮಹಿಳೆ)** |
| 9 | 9 | ವಿದ್ಯಾರಣ್ಯಪುರ | **ಹಿಂದುಳಿದ ವರ್ಗ – ಎ (ಮಹಿಳೆ)** |
| 10 | 10 | ದೊಡ್ಡಬೊಮ್ಮಸಂದ್ರ | **ಹಿಂದುಳಿದ ವರ್ಗ – ಬಿ** |
| 11 | 11 | ಕುವೆಂಪು ನಗರ | **ಪರಿಶಿಷ್ಟ ಜಾತಿ** |
| 12 | 12 | ಶೆಟ್ಟಿಹಳ್ಳಿ | **ಪರಿಶಿಷ್ಟ ಜಾತಿ** |
| 13 | 13 | ಮಲ್ಲಸಂದ್ರ | **ಸಾಮಾನ್ಯ** |
| 14 | 14 | ಬಾಗಲಕುಂಟೆ | **ಸಾಮಾನ್ಯ** |
| 15 | 15 | ಟಿ.ದಾಸರಹಳ್ಳಿ | **ಹಿಂದುಳಿದ ವರ್ಗ – ಎ** |
| 16 | 16 | ಜಾಲಹಳ್ಳಿ | **ಪರಿಶಿಷ್ಟ ಜಾತಿ** |
| 17 | 17 | ಜೆ.ಪಿ.ಉದ್ಯಾನವನ | **ಸಾಮಾನ್ಯ (ಮಹಿಳೆ)** |
| 18 | 18 | ರಾಧಾ ಕೃಷ್ಣಾ ದೇವಸ್ಥಾನ ವಾರ್ಡ್ | **ಪರಿಶಿಷ್ಟ ಜಾತಿ** |
| 19 | 19 | ಸಂಜಯ ನಗರ | **ಸಾಮಾನ್ಯ** |
| 20 | 20 | ಗಂಗಾನಗರ | **ಹಿಂದುಳಿದ ವರ್ಗ – ಎ** |
| 21 | 21 | ಹೆಬ್ಬಾಳ | **ಸಾಮಾನ್ಯ** |
| 22 | 22 | ವಿಶ್ವನಾಥ ನಾಗೇನಹಳ್ಳಿ | **ಸಾಮಾನ್ಯ (ಮಹಿಳೆ)** |
| 23 | 23 | ನಾಗಾವರ | **ಹಿಂದುಳಿದ ವರ್ಗ – ಎ (ಮಹಿಳೆ)** |
| 24 | 24 | ಹೆಚ್.ಬಿ.ಆರ್. ಬಡಾವಣೆ | **ಹಿಂದುಳಿದ ವರ್ಗ – ಬಿ** |

| ಕ್ರಮ ಸಂಖ್ಯೆ | ವಾರ್ಡ್ ಸಂಖ್ಯೆ | ವಾರ್ಡಿನ ಹೆಸರು | ಮೀಸಲಾತಿ |
|---|---|---|---|
| 1 | 2 | 3 | 4 |
| 25 | 25 | ಹೊರಮಾವು | ಸಾಮಾನ್ಯ |
| 26 | 26 | ರಾಮೂರ್ತಿನಗರ | ಸಾಮಾನ್ಯ |
| 27 | 27 | ಬಾಣಸವಾಡಿ | ಹಿಂದುಳಿದ ವರ್ಗ – ಎ |
| 28 | 28 | ಕಮ್ಮನಹಳ್ಳಿ | ಸಾಮಾನ್ಯ (ಮಹಿಳೆ) |
| 29 | 29 | ಕಾಚರಕನಹಳ್ಳಿ | ಸಾಮಾನ್ಯ |
| 30 | 30 | ಕಾಡುಗೊಂಡನಹಳ್ಳಿ. | ಹಿಂದುಳಿದ ವರ್ಗ – ಎ |
| 31 | 31 | ಕುಶಾಲ್ ನಗರ | ಸಾಮಾನ್ಯ |
| 32 | 32 | ಕಾವಲ್‌ಭೈರಸಂದ್ರ | ಸಾಮಾನ್ಯ (ಮಹಿಳೆ) |
| 33 | 33 | ಮನೋರಾಯನ ಪಾಳ್ಯ | ಹಿಂದುಳಿದ ವರ್ಗ – ಎ (ಮಹಿಳೆ) |
| 34 | 34 | ಗಂಗೇನಹಳ್ಳಿ | ಹಿಂದುಳಿದ ವರ್ಗ – ಬಿ (ಮಹಿಳೆ) |
| 35 | 35 | ಅರಮನೆ ನಗರ | ಸಾಮಾನ್ಯ |
| 36 | 36 | ಮತ್ತಿಕೆರೆ | ಪರಿಶಿಷ್ಟ ಜಾತಿ |
| 37 | 37 | ಯಶವಂತಪುರ | ಸಾಮಾನ್ಯ |
| 38 | 38 | ಹೆಚ್.ಎಂ.ಟಿ. | ಪರಿಶಿಷ್ಟ ಪಂಗಡ |
| 39 | 39 | ಚೊಕ್ಕಸಂದ್ರ | ಹಿಂದುಳಿದ ವರ್ಗ – ಎ |
| 40 | 40 | ದೊಡ್ಡಬಿದರಕಲ್ಲು | ಸಾಮಾನ್ಯ (ಮಹಿಳೆ) |
| 41 | 41 | ಪೀಣ್ಯ ಕೈಗಾರಿಕಾ ಪ್ರದೇಶ | ಸಾಮಾನ್ಯ |
| 42 | 42 | ಲಕ್ಷ್ಮಿದೇವಿ ನಗರ | ಹಿಂದುಳಿದ ವರ್ಗ – ಎ |
| 43 | 43 | ನಂದಿನಿ ಬಡಾವಣೆ | ಸಾಮಾನ್ಯ |
| 44 | 44 | ಮಾರಪ್ಪನ ಪಾಳ್ಯ | ಸಾಮಾನ್ಯ (ಮಹಿಳೆ) |
| 45 | 45 | ಮಲ್ಲೇಶ್ವರಂ | ಹಿಂದುಳಿದ ವರ್ಗ – ಎ (ಮಹಿಳೆ) |
| 46 | 46 | ಜಯಚಾಮ ರಾಜೇಂದ್ರ ನಗರ | ಹಿಂದುಳಿದ ವರ್ಗ – ಬಿ |
| 47 | 47 | ದೇವರ ಜೀವನಹಳ್ಳಿ | ಸಾಮಾನ್ಯ |
| 48 | 48 | ಮುನೇಶ್ವರ ನಗರ | ಸಾಮಾನ್ಯ |
| 49 | 49 | ಲಿಂಗರಾಜಪುರ | ಹಿಂದುಳಿದ ವರ್ಗ – ಎ |
| 50 | 50 | ಬೆನ್ನಿಗಾನಹಳ್ಳಿ | ಸಾಮಾನ್ಯ (ಮಹಿಳೆ) |
| 51 | 51 | ವಿಜ್ಞಾನಪುರ | ಪರಿಶಿಷ್ಟ ಜಾತಿ |
| 52 | 52 | ಕೆ.ಆರ್ ಪುರಂ. | ಸಾಮಾನ್ಯ |
| 53 | 53 | ಬಸವನಪುರ | ಹಿಂದುಳಿದ ವರ್ಗ – ಎ |
| 54 | 54 | ಹೂಡಿ | ಸಾಮಾನ್ಯ |
| 55 | 55 | ದೇವಸಂದ್ರ | ಸಾಮಾನ್ಯ (ಮಹಿಳೆ) |
| 56 | 56 | ಎ.ನಾರಾಯಣಪುರ | ಹಿಂದುಳಿದ ವರ್ಗ – ಎ (ಮಹಿಳೆ) |
| 57 | 57 | ಸಿ.ವಿ.ರಾಮನ್ ನಗರ | ಹಿಂದುಳಿದ ವರ್ಗ – ಬಿ |
| 58 | 58 | ಹೊಸ ತಿಪ್ಪಸಂದ್ರ | ಸಾಮಾನ್ಯ |
| 59 | 59 | ಮಾರುತಿ ಸೇವಾನಗರ | ಪರಿಶಿಷ್ಟ ಜಾತಿ (ಮಹಿಳೆ) |
| 60 | 60 | ಸಗಾಯಪುರಂ | ಪರಿಶಿಷ್ಟ ಜಾತಿ (ಮಹಿಳೆ) |
| 61 | 61 | ಎಸ್.ಕೆ.ಗಾರ್ಡನ್ | ಸಾಮಾನ್ಯ |

| ಕ್ರಮ ಸಂಖ್ಯೆ | ವಾರ್ಡ್ ಸಂಖ್ಯೆ | ವಾರ್ಡಿನ ಹೆಸರು | ಮೀಸಲಾತಿ |
|---|---|---|---|
| 1 | 2 | 3 | 4 |
| 62 | 62 | ರಾಮಸ್ವಾಮಿ ಪಾಳ್ಯ | ಪರಿಶಿಷ್ಟ ಜಾತಿ |
| 63 | 63 | ಜಯಮಹಲ್ | ಹಿಂದುಳಿದ ವರ್ಗ – ಎ |
| 64 | 64 | ರಾಜಮಹಲ್ ಗುಟ್ಟಹಳ್ಳಿ | ಸಾಮಾನ್ಯ (ಮಹಿಳೆ) |
| 65 | 65 | ಕಾಡು ಮಲ್ಲೇಶ್ವರಂ | ಸಾಮಾನ್ಯ |
| 66 | 66 | ಸುಬ್ರಹ್ಮಣ್ಯ ನಗರ | ಹಿಂದುಳಿದ ವರ್ಗ – ಎ |
| 67 | 67 | ನಾಗಪುರ | ಸಾಮಾನ್ಯ |
| 68 | 68 | ಮಹಾಲಕ್ಷ್ಮೀಪುರಂ | ಸಾಮಾನ್ಯ (ಮಹಿಳೆ) |
| 69 | 69 | ಲಗ್ಗೆರೆ | ಹಿಂದುಳಿದ ವರ್ಗ – ಎ (ಮಹಿಳೆ) |
| 70 | 70 | ರಾಜಗೋಪಾಲನಗರ. | ಹಿಂದುಳಿದ ವರ್ಗ – ಬಿ (ಮಹಿಳೆ) |
| 71 | 71 | ಹೆಗ್ಗನಹಳ್ಳಿ | ಸಾಮಾನ್ಯ |
| 72 | 72 | ಹೆರೋಹಳ್ಳಿ | ಸಾಮಾನ್ಯ |
| 73 | 73 | ಕೊಟ್ಟಿಗೇಪಾಳ್ಯ | ಹಿಂದುಳಿದ ವರ್ಗ – ಎ |
| 74 | 74 | ಶಕ್ತಿಗಣಪತಿ ನಗರ | ಪರಿಶಿಷ್ಟ ಜಾತಿ |
| 75 | 75 | ಶಂಕರಮಠ | ಸಾಮಾನ್ಯ (ಮಹಿಳೆ) |
| 76 | 76 | ಗಾಯತ್ರಿ ನಗರ | ಸಾಮಾನ್ಯ |
| 77 | 77 | ದತ್ತಾತ್ರೇಯ ದೇವಸ್ಥಾನ | ಹಿಂದುಳಿದ ವರ್ಗ – ಎ |
| 78 | 78 | ಪುಲಿಕೇಶಿನಗರ | ಸಾಮಾನ್ಯ |
| 79 | 79 | ಸರ್ವಜ್ಞ ನಗರ | ಪರಿಶಿಷ್ಟ ಜಾತಿ (ಮಹಿಳೆ) |
| 80 | 80 | ಹೊಯ್ಸಳ ನಗರ | ಸಾಮಾನ್ಯ (ಮಹಿಳೆ) |
| 81 | 81 | ವಿಜ್ಞಾನ ನಗರ | ಹಿಂದುಳಿದ ವರ್ಗ – ಎ (ಮಹಿಳೆ) |
| 82 | 82 | ಗರುಡಾಚಾರ್ ಪಾಳ್ಯ | ಹಿಂದುಳಿದ ವರ್ಗ – ಬಿ |
| 83 | 83 | ಕಾಡುಗೋಡಿ | ಸಾಮಾನ್ಯ |
| 84 | 84 | ಹಗದೂರು | ಸಾಮಾನ್ಯ |
| 85 | 85 | ದೊಡ್ಡ ನೆಕ್ಕುಂಡಿ | ಹಿಂದುಳಿದ ವರ್ಗ – ಎ |
| 86 | 86 | ಮಾರತಹಳ್ಳಿ | ಸಾಮಾನ್ಯ (ಮಹಿಳೆ) |
| 87 | 87 | ಹೆಚ್.ಎ.ಎಲ್. ವಿಮಾನ ನಿಲ್ದಾಣ | ಸಾಮಾನ್ಯ |
| 88 | 88 | ಜೀವನ್ ಭೀಮಾನಗರ | ಹಿಂದುಳಿದ ವರ್ಗ – ಎ |
| 89 | 89 | ಜೋಗುಪಾಳ್ಯ | ಸಾಮಾನ್ಯ |
| 90 | 90 | ಅಲಸೂರು | ಸಾಮಾನ್ಯ (ಮಹಿಳೆ) |
| 91. | 91. | ಭಾರತಿ ನಗರ | ಹಿಂದುಳಿದ ವರ್ಗ – ಎ (ಮಹಿಳೆ) |
| 92 | 92 | ಶಿವಾಜಿ ನಗರ | ಹಿಂದುಳಿದ ವರ್ಗ – ಬಿ |
| 93 | 93 | ವಸಂತನಗರ | ಸಾಮಾನ್ಯ |
| 94 | 94 | ಗಾಂಧಿನಗರ | ಸಾಮಾನ್ಯ |
| 95 | 95 | ಸುಭಾಷ್ ನಗರ | ಪರಿಶಿಷ್ಟ ಜಾತಿ (ಮಹಿಳೆ) |
| 96 | 96 | ಓಕಳಿಪುರಂ | ಹಿಂದುಳಿದ ವರ್ಗ – ಎ |
| 97 | 97 | ದಯಾನಂದ ನಗರ | ಪರಿಶಿಷ್ಟ ಜಾತಿ (ಮಹಿಳೆ) |
| 98 | 98 | ಪ್ರಕಾಶ್ ನಗರ | ಸಾಮಾನ್ಯ (ಮಹಿಳೆ) |

| ಕ್ರಮ ಸಂಖ್ಯೆ | ವಾರ್ಡ್ ಸಂಖ್ಯೆ | ವಾರ್ಡಿನ ಹೆಸರು | ಮೀಸಲಾತಿ |
|---|---|---|---|
| **1** | **2** | **3** | **4** |
| 99 | 99 | ರಾಜಾಜಿ ನಗರ | **ಸಾಮಾನ್ಯ** |
| 100 | 100 | ಬಸವೇಶ್ವರ ನಗರ | **ಹಿಂದುಳಿದ ವರ್ಗ – ಎ** |
| 101 | 101 | ಕಾಮಾಕ್ಷಿ ಪಾಳ್ಯ | **ಸಾಮಾನ್ಯ** |
| 102 | 102 | ವೃಷಭಾವತಿ ನಗರ | **ಸಾಮಾನ್ಯ (ಮಹಿಳೆ)** |
| 103 | 103 | ಕಾವೇರಿಪುರ | **ಹಿಂದುಳಿದ ವರ್ಗ – ಎ (ಮಹಿಳೆ)** |
| 104 | 104 | ಗೋವಿಂದರಾಜ್ ನಗರ | **ಹಿಂದುಳಿದ ವರ್ಗ – ಬಿ (ಮಹಿಳೆ)** |
| 105 | 105 | ಅಗ್ರಹಾರ ದಾಸರಹಳ್ಳಿ | **ಸಾಮಾನ್ಯ** |
| 106 | 106 | ಡಾ. ರಾಜಕುಮಾರ ವಾರ್ಡ್ | **ಸಾಮಾನ್ಯ** |
| 107 | 107 | ಶಿವನಗರ | **ಹಿಂದುಳಿದ ವರ್ಗ – ಎ** |
| 108 | 108 | ಶ್ರೀರಾಮ ಮಂದಿರ ವಾರ್ಡ್ | **ಸಾಮಾನ್ಯ (ಮಹಿಳೆ)** |
| 109 | 109 | ಚಿಕ್ಕಪೇಟೆ | **ಸಾಮಾನ್ಯ** |
| 110 | 110 | ಸಂಪಂಗಿರಾಮ್ ನಗರ | **ಹಿಂದುಳಿದ ವರ್ಗ – ಎ** |
| 111 | 111 | ಶಾಂತಲಾ ನಗರ | **ಸಾಮಾನ್ಯ** |
| 112 | 112 | ದೊಮ್ಮಲೂರು | **ಸಾಮಾನ್ಯ (ಮಹಿಳೆ)** |
| 113 | 113 | ಕೋನೇನ ಅಗ್ರಹಾರ | **ಹಿಂದುಳಿದ ವರ್ಗ – ಎ (ಮಹಿಳೆ)** |
| 114 | 114 | ಅಗರಮ್ | **ಪರಿಶಿಷ್ಟ ಜಾತಿ (ಮಹಿಳೆ)** |
| 115 | 115 | ವನ್ನಾರ್‌ಪೇಟೆ | **ಹಿಂದುಳಿದ ವರ್ಗ – ಬಿ** |
| 116 | 116 | ನೀಲಸಂದ್ರ | **ಪರಿಶಿಷ್ಟ ಪಂಗಡ (ಮಹಿಳೆ)** |
| 117 | 117 | ಶಾಂತಿನಗರ | **ಸಾಮಾನ್ಯ** |
| 118 | 118 | ಸುದಾಮ್ ನಗರ | **ಪರಿಶಿಷ್ಟ ಜಾತಿ (ಮಹಿಳೆ)** |
| 119 | 119 | ಧರ್ಮರಾಯ ಸ್ವಾಮಿ ದೇವಸ್ಥಾನ ವಾರ್ಡ್ | **ಸಾಮಾನ್ಯ** |
| 120 | 120 | ಕಾಟನ್ ಪೇಟೆ | **ಹಿಂದುಳಿದ ವರ್ಗ – ಎ** |
| 121 | 121 | ಬಿನ್ನಿಪೇಟೆ | **ಸಾಮಾನ್ಯ (ಮಹಿಳೆ)** |
| 122 | 122 | ಕೆಂಪಾಪುರ ಅಗ್ರಹಾರ | **ಸಾಮಾನ್ಯ** |
| 123 | 123 | ವಿಜಯ ನಗರ | **ಹಿಂದುಳಿದ ವರ್ಗ – ಎ** |
| 124 | 124 | ಹೊಸಹಳ್ಳಿ | **ಪರಿಶಿಷ್ಟ ಜಾತಿ** |
| 125 | 125 | ಮಾರೇನಹಳ್ಳಿ | **ಸಾಮಾನ್ಯ** |
| 126 | 126 | ಮಾರುತಿ ಮಂದಿರ ವಾರ್ಡ್ | **ಸಾಮಾನ್ಯ (ಮಹಿಳೆ)** |
| 127 | 127 | ಮೂಡಲಪಾಳ್ಯ | **ಹಿಂದುಳಿದ ವರ್ಗ – ಎ (ಮಹಿಳೆ)** |
| 128 | 128 | ನಾಗರಬಾವಿ | **ಹಿಂದುಳಿದ ವರ್ಗ – ಬಿ** |
| 129 | 129 | ಜ್ಞಾನ ಭಾರತಿ ವಾರ್ಡ್ | **ಸಾಮಾನ್ಯ** |
| 130 | 130 | ಉಲ್ಲಾಳು | **ಸಾಮಾನ್ಯ** |
| 131 | 131 | ನಾಯಂಡಹಳ್ಳಿ | **ಪರಿಶಿಷ್ಟ ಜಾತಿ** |
| 132 | 132 | ಅತ್ತಿಗುಪ್ಪೆ | **ಹಿಂದುಳಿದ ವರ್ಗ – ಎ** |
| 133 | 133 | ಹಂಪಿ ನಗರ | **ಸಾಮಾನ್ಯ (ಮಹಿಳೆ)** |
| 134 | 134 | ಬಾಪೂಜಿ ನಗರ | **ಸಾಮಾನ್ಯ** |
| 135 | 135 | ಪಾದರಾಯನಪುರ | **ಹಿಂದುಳಿದ ವರ್ಗ – ಎ** |

| ಕ್ರಮ ಸಂಖ್ಯೆ | ವಾರ್ಡ್ ಸಂಖ್ಯೆ | ವಾರ್ಡಿನ ಹೆಸರು | ಮೀಸಲಾತಿ |
|---|---|---|---|
| **1** | **2** | **3** | **4** |
| 136 | 136 | ಜಗಜೀವನ್ ರಾಮ್‌ನಗರ | **ಸಾಮಾನ್ಯ** |
| 137 | 137 | ರಾಯಪುರಂ | **ಸಾಮಾನ್ಯ (ಮಹಿಳೆ)** |
| 138 | 138 | ಛಲವಾದಿ ಪಾಳ್ಯ | **ಪರಿಶಿಷ್ಟ ಜಾತಿ (ಮಹಿಳೆ)** |
| 139 | 139 | ಕೆ.ಆರ್. ಮಾರುಕಟ್ಟೆ | **ಹಿಂದುಳಿದ ವರ್ಗ – ಎ (ಮಹಿಳೆ)** |
| 140 | 140 | ಚಾಮರಾಜಪೇಟೆ | **ಹಿಂದುಳಿದ ವರ್ಗ – ಬಿ (ಮಹಿಳೆ)** |
| 141 | 141 | ಆಜಾದ್ ನಗರ | **ಸಾಮಾನ್ಯ** |
| 142 | 142 | ಸುಂಕೇನಹಳ್ಳಿ | **ಸಾಮಾನ್ಯ** |
| 143 | 143 | ವಿಶ್ವೇಶ್ವರಪುರಂ | **ಹಿಂದುಳಿದ ವರ್ಗ – ಎ** |
| 144 | 144 | ಸಿದ್ದಾಪುರ | **ಸಾಮಾನ್ಯ (ಮಹಿಳೆ)** |
| 145 | 145 | ಹೊಂಬೇಗೌಡ ನಗರ | **ಸಾಮಾನ್ಯ** |
| 146 | 146 | ಲಕ್ಕಸಂದ್ರ | **ಹಿಂದುಳಿದ ವರ್ಗ – ಎ** |
| 147 | 147 | ಆಡುಗೋಡಿ | **ಪರಿಶಿಷ್ಟ ಜಾತಿ** |
| 148 | 148 | ಈಜೀಪುರ | **ಸಾಮಾನ್ಯ** |
| 149 | 149 | ವರ್ತೂರು | **ಸಾಮಾನ್ಯ (ಮಹಿಳೆ)** |
| 150 | 150 | ಬೆಲಂದೂರು | **ಪರಿಶಿಷ್ಟ ಜಾತಿ** |
| 151 | 151 | ಕೋರಮಂಗಲ | **ಹಿಂದುಳಿದ ವರ್ಗ – ಎ (ಮಹಿಳೆ)** |
| 152 | 152 | ಸುದ್ದುಗುಂಟೆಪಾಳ್ಯ | **ಹಿಂದುಳಿದ ವರ್ಗ – ಬಿ** |
| 153 | 153 | ಜಯನಗರ | **ಸಾಮಾನ್ಯ** |
| 154 | 154 | ಬಸವನಗುಡಿ | **ಸಾಮಾನ್ಯ** |
| 155 | 155 | ಹನುಮಂತನಗರ | **ಹಿಂದುಳಿದ ವರ್ಗ – ಎ** |
| 156 | 156 | ಶ್ರೀನಗರ | **ಸಾಮಾನ್ಯ (ಮಹಿಳೆ)** |
| 157 | 157 | ಗಾಳಿ ಆಂಜನೇಯ ದೇವಸ್ಥಾನ ವಾರ್ಡ್ | **ಸಾಮಾನ್ಯ** |
| 158 | 158 | ದೀಪಾಂಜಂಲಿನಗರ | **ಹಿಂದುಳಿದ ವರ್ಗ – ಎ** |
| 159 | 159 | ಕೆಂಗೇರಿ | **ಸಾಮಾನ್ಯ** |
| 160 | 160 | ರಾಜರಾಜೇಶ್ವರಿ ನಗರ | **ಸಾಮಾನ್ಯ (ಮಹಿಳೆ)** |
| 161 | 161 | ಹೊಸಕೆರೆಹಳ್ಳಿ | **ಹಿಂದುಳಿದ ವರ್ಗ – ಎ (ಮಹಿಳೆ)** |
| 162 | 162 | ಗಿರಿನಗರ | **ಸಾಮಾನ್ಯ** |
| 163 | 163 | ಕತ್ರಿಗುಪ್ಪೆ | **ಸಾಮಾನ್ಯ** |
| 164 | 164 | ವಿದ್ಯಾಪೀಠ ವಾರ್ಡ್ | **ಹಿಂದುಳಿದ ವರ್ಗ – ಎ** |
| 165 | 165 | ಗಣೇಶ ಮಂದಿರ ವಾರ್ಡ್ | **ಸಾಮಾನ್ಯ (ಮಹಿಳೆ)** |
| 166 | 166 | ಕರಿಸಂದ್ರ | **ಸಾಮಾನ್ಯ** |
| 167 | 167 | ಯಡಿಯೂರು | **ಹಿಂದುಳಿದ ವರ್ಗ – ಎ** |
| 168 | 168 | ಪಟ್ಟಾಭಿರಾಮ ನಗರ | **ಸಾಮಾನ್ಯ** |
| 169 | 169 | ಬೈರಸಂದ್ರ | **ಸಾಮಾನ್ಯ (ಮಹಿಳೆ)** |
| 170 | 170 | ಜಯನಗರ ಪೂರ್ವ | **ಪರಿಶಿಷ್ಟ ಜಾತಿ** |
| 171 | 171 | ಗುರಪ್ಪನಪಾಳ್ಯ | **ಹಿಂದುಳಿದ ವರ್ಗ – ಎ (ಮಹಿಳೆ)** |

| ಕ್ರಮ ಸಂಖ್ಯೆ | ವಾರ್ಡ್ ಸಂಖ್ಯೆ | ವಾರ್ಡಿನ ಹೆಸರು | ಮೀಸಲಾತಿ |
|---|---|---|---|
| **1** | **2** | **3** | **4** |
| 172 | 172 | ಮಡಿವಾಳ | **ಸಾಮಾನ್ಯ** |
| 173 | 173 | ಜಕ್ಕಸಂದ್ರ | **ಸಾಮಾನ್ಯ** |
| 174 | 174 | ಹೆಚ್.ಎಸ್.ಆರ್. ಬಡಾವಣೆ | **ಹಿಂದುಳಿದ ವರ್ಗ – ಎ** |
| 175 | 175 | ಬೊಮ್ಮನಹಳ್ಳಿ | **ಸಾಮಾನ್ಯ (ಮಹಿಳೆ)** |
| 176 | 176 | ಬಿ.ಟಿ.ಎಂ. ಬಡಾವಣೆ | **ಸಾಮಾನ್ಯ** |
| 177 | 177 | ಜೆ.ಪಿ.ನಗರ | **ಹಿಂದುಳಿದ ವರ್ಗ – ಎ** |
| 178 | 178 | ಸಾರಕ್ಕಿ | **ಸಾಮಾನ್ಯ** |
| 179 | 179 | ಶಾಕಾಂಬರಿನಗರ | **ಸಾಮಾನ್ಯ (ಮಹಿಳೆ)** |
| 180 | 180 | ಬನಶಂಕರಿ ದೇವಸ್ಥಾನ ವಾರ್ಡ್ | **ಹಿಂದುಳಿದ ವರ್ಗ – ಎ (ಮಹಿಳೆ)** |
| 181 | 181 | ಕುಮಾರಸ್ವಾಮಿ ಬಡಾವಣೆ | **ಸಾಮಾನ್ಯ** |
| 182 | 182 | ಪದ್ಮನಾಭ ನಗರ | **ಸಾಮಾನ್ಯ** |
| 183 | 183 | ಚಿಕ್ಕ ಕಲ್ಲಸಂದ್ರ | **ಹಿಂದುಳಿದ ವರ್ಗ – ಎ** |
| 184 | 184 | ಉತ್ತರಹಳ್ಳಿ | **ಪರಿಶಿಷ್ಟ ಜಾತಿ** |
| 185 | 185 | ಯಲಚೇನಹಳ್ಳಿ | **ಸಾಮಾನ್ಯ (ಮಹಿಳೆ)** |
| 186 | 186 | ಜರಗನಹಳ್ಳಿ | **ಸಾಮಾನ್ಯ** |
| 187 | 187 | ಪುಟ್ಟೇನಹಳ್ಳಿ | **ಹಿಂದುಳಿದ ವರ್ಗ – ಎ** |
| 188 | 188 | ಬಿಲೇಕಹಳ್ಳಿ | **ಪರಿಶಿಷ್ಟ ಜಾತಿ** |
| 189 | 189 | ಹೊಂಗಸಂದ್ರ | **ಸಾಮಾನ್ಯ** |
| 190 | 190 | ಮಂಗಮ್ಮನ ಪಾಳ್ಯ | **ಸಾಮಾನ್ಯ (ಮಹಿಳೆ)** |
| 191 | 191 | ಸಿಂಗಸಂದ್ರ | **ಹಿಂದುಳಿದ ವರ್ಗ – ಎ (ಮಹಿಳೆ)** |
| 192 | 192 | ಬೇಗೂರು | **ಸಾಮಾನ್ಯ** |
| 193 | 193 | ಅರಕೆರೆ | **ಸಾಮಾನ್ಯ** |
| 194 | 194 | ಗೊಟ್ಟಿಗೆರೆ | **ಹಿಂದುಳಿದ ವರ್ಗ – ಎ** |
| 195 | 195 | ಕೋಣನಕುಂಟೆ | **ಸಾಮಾನ್ಯ (ಮಹಿಳೆ)** |
| 196 | 196 | ಅಂಜನಾಪುರ | **ಸಾಮಾನ್ಯ** |
| 197 | 197 | ವಸಂತಪುರ | **ಸಾಮಾನ್ಯ (ಮಹಿಳೆ)** |
| 198 | 198 | ಹೆಮ್ಮಿಗೆಪುರ | **ಹಿಂದುಳಿದ ವರ್ಗ – ಎ (ಮಹಿಳೆ)** |

ಸಿ.ಆರ್.ರವೀಂದ್ರ
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

